# ಕರ್ನಾಟಕ ವಿಧಾನ ಪರಿಷತ್ತು

(1) ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 2142
(2) ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ (ನಾಮ ನಿರ್ದೇಶನ ಹೊಂದಿದವರು))
(3) ಉತ್ತರಿಸಬೇಕಾದ ದಿನಾಂಕ : 25.03.2021
(4) ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರ ಹಾಗೂ ಸರ್ಕಾರದ ವಿರುದ್ಧವಿರುವ ಪ್ರಕರಣಗಳು ಹೈಕೋರ್ಟ್‌ನಲ್ಲಿ ಎಷ್ಟಿವೆ; | ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಸಿವಿಲ್ ಪ್ರಕರಣಗಳ ವಿವರ ಕೆಳಕಂಡಂತಿದೆ:<br>• ಸರ್ಕಾರದ ಪ್ರಕರಣಗಳ ಸಂಖ್ಯೆ: 692<br>• ಸರ್ಕಾರದ ವಿರುದ್ಧವಿರುವ ಪ್ರಕರಣಗಳ ಸಂಖ್ಯೆ: 21735 |
| (ಆ) | ಸದರಿ ಪ್ರಕರಣದಲ್ಲಿ ಯಥಾಸ್ಥಿತಿ ಕಾಪಾಡುವ ಎಷ್ಟು ಪ್ರಕರಣಗಳಿವೆ; | ಮಾನ್ಯ ನ್ಯಾಯಾಲಯಗಳು ನೀಡುವ ಯಥಾಸ್ಥಿತಿ ಆದೇಶಗಳು ಕಾಲ ಕಾಲಕ್ಕೆ ವಿಸ್ತರಣೆ ಮತ್ತು ರದ್ದುಗೊಳ್ಳುವ ಕಾರಣ, ನಿಖರವಾದ ಅಂಕಿ ಸಂಖ್ಯೆಗಳನ್ನು ಒದಗಿಸಲು ಸಾಧ್ಯವಾಗುವುದಿಲ್ಲ. |
| (ಇ) | ವಿವಿಧ ಕಾರಣಗಳಿಂದ ಸರ್ಕಾರಕ್ಕೆ ಸಂಬಂಧಿತ ವ್ಯಾಜ್ಯಗಳ ವಿಲೇವಾರಿ ವಿಳಂಬದಿಂದ ಸರ್ಕಾರದ ಆಸ್ತಿ ಸದ್ಬಳಕೆಗೆ ಸಮಸ್ಯೆ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;<br><br>ಹಾಗಿದ್ದಲ್ಲಿ, ಪ್ರಕರಣಗಳ ಶೀಘ್ರ ವಿಲೇವಾರಿಗೆ ಸರ್ಕಾರ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ಜೊತೆ ಚರ್ಚಿಸುವುದೇ; | ಇಲ್ಲ<br><br>ಒಂದು ವೇಳೆ ಸಮಸ್ಯೆ ಉದ್ಭವಿಸಿದಲ್ಲಿ ಉಚ್ಚ ನ್ಯಾಯಾಲಯದೊಂದಿಗೆ ವ್ಯವಹರಿಸಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು. |
| (ಈ) | ಸರ್ಕಾರಕ್ಕೆ ಸಂಬಂಧಿಸಿದ ಪ್ರಕರಣಗಳ ಕುರಿತಂತೆ ಕಾಲಮಿತಿಯಲ್ಲಿ ನ್ಯಾಯ ಸಿಗುವಂತೆ ಮಾಡಲು ಬಾಕಿ ಇರುವ ಪ್ರಕರಣಗಳ ಸಂಖ್ಯೆಗೆ ಅನುಗುಣವಾಗಿ ನ್ಯಾಯಾಧೀಶರ ಸಂಖ್ಯೆ ಹೆಚ್ಚಿಸಲು ಸರ್ಕಾರದ ಕ್ರಮಗಳೇನು;<br><br>ಕಾಲಮಿತಿಯ ನಿಯಮ ಕಡ್ಡಾಯವಾಗಿ ಪಾಲನೆಯಾಗುವಂತೆ ಸರ್ಕಾರ ಎಚ್ಚರಿಕೆ ವಹಿಸುವುದೇ? | ಮಲಿಕ್ ಮಜ್ಹರ್ ಸುಲ್ತಾನ್ ಮತ್ತು ಇನ್ನೊಬ್ಬರು vs. ಉತ್ತರ ಪ್ರದೇಶ ಲೋಕಸೇವಾ ಆಯೋಗ ಮತ್ತು ಇತರರು ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನ್ಯಾಯಾಧೀಶರ ಹುದ್ದೆಯ ನೇಮಕಾತಿ ಮಾರ್ಗಸೂಚಿಗಳನ್ನು ಹೊರಡಿಸಿ ವೇಳಾಪಟ್ಟಿಯನ್ನು ನಿಗದಿಪಡಿಸಿರುತ್ತದೆ. ಸದರಿ ಮಾರ್ಗಸೂಚಿಯಲ್ಲಿ ನಿಗದಿಪಡಿಸಿದ ವೇಳಾಪಟ್ಟಿಯನ್ವಯ ಸಿವಿಲ್/ಜಿಲ್ಲಾ ನ್ಯಾಯಾಧೀಶರುಗಳನ್ನು ನೇಮಕಾತಿ ಮಾಡಲಾಗುತ್ತಿದೆ.<br><br>ಹೌದು |

(ಸಂಖ್ಯೆ: ಲಾ-ಎಲ್‌ಎಸಿ/76/2021)

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ
ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು,
ಕರ್ನಾಟಕ ಸರ್ಕಾರ.